# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : **467**

ಸದಸ್ಯರ ಹೆಸರು : **ಶ್ರೀ ಎಸ್.ರವಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)**

ಉತ್ತರಿಸಬೇಕಾದ ದಿನಾಂಕ : **21-02-2022**

ಉತ್ತರಿಸುವ ಸಚಿವರು : **ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು**

****

| | ಪ್ರಶ್ನೆ | ಉತ್ತರ |
|---|---|---|
| ಅ) | ಮಾಗಡಿ ತಾಲ್ಲೂಕು ಕುದೂರು ಉಪವಿಭಾಗದಲ್ಲಿ ಹೆಚ್.ವಿ.ಡಿ.ಎಸ್. ಯೋಜನೆಯಡಿಯಲ್ಲಿ ಆದ್ಯತೆಯನ್ನು ಪರಿಗಣಿಸದೆ ಹಣ ನೀಡಿದವರಿಗೆ ವಿದ್ಯುತ್ ಟಿ.ಸಿ.ಗಳನ್ನು ಅಳವಡಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಆದ್ಯತೆಯನ್ನು ಪರಿಗಣಿಸದೆ ಅಕ್ರಮವೆಸಗಿರುವ ಅಧಿಕಾರಿಗಳ ವಿರುದ್ಧ ಸರ್ಕಾರವು ಕೈಗೊಳ್ಳುವ ಕ್ರಮವೇನು; (ವಿವರ ನೀಡುವುದು) | ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ವ್ಯಾಪ್ತಿಯಲ್ಲಿ ವಿದ್ಯುತ್ ವಿತರಣ ವ್ಯವಸ್ಥೆಯ ತಾಂತ್ರಿಕ ಮತ್ತು ವಾಣಿಜ್ಯ ನಷ್ಟವನ್ನು ತಗ್ಗಿಸುವ ದೃಷ್ಟಿಯಿಂದ ಹಾಗೂ ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗದ ನಿರ್ದೇಶನದಂತೆ ವಿದ್ಯುತ್ ವಿತರಣಾ ನಷ್ಟ ಹೆಚ್ಚಿರುವ ಫೀಡರ್‌ಗಳನ್ನು ಆಯ್ಕೆಮಾಡಿ ಬೆಸ್ಕಾಂ ವತಿಯಿಂದ ಹೆಚ್.ವಿ.ಡಿ.ಎಸ್ ಕಾಮಗಾರಿಯನ್ನು ಕೈಗೊಳ್ಳಲಾಗಿರುತ್ತದೆ.<br><br>ಹಾಲಿ ಇರುವ ಎಲ್.ಟಿ.ಮಾರ್ಗವನ್ನು ಕಡಿಮೆಗೊಳಿಸಿ ಕೊಳವೆಬಾವಿ ಸ್ಥಾವರಗಳಿಗೆ ವಿದ್ಯುತ್ ಸಂಪರ್ಕವನ್ನು ನೀಡುವುದು ಹೆಚ್.ವಿ.ಡಿ.ಎಸ್ ಯೋಜನೆಯ ಉದ್ದೇಶವಾಗಿರುತ್ತದೆ.<br><br>**ಹೆಚ್.ವಿ.ಡಿ.ಎಸ್ ಯೋಜನೆಯಡಿಯ ಕಾಮಗಾರಿಗಳು:**<br>➢ ಸಕ್ರಮಗೊಂಡ (ರೂ.10,000/- ಮತ್ತು ಇತರೆ ಠೇವಣಿಗಳನ್ನು ಪಾವತಿಮಾಡಿದ) ಕೊಳವೆಬಾವಿ ಸ್ಥಾವರಗಳಿಗೆ ಹಾಲಿ ಎಲ್.ಟಿ. ಕಾರ್ಯಜಾಲವನ್ನು ಮಾರ್ಪಾಡುಗೊಳಿಸಿ 11 ಕೆ.ವಿ.ಮಾರ್ಗವನ್ನು ಅಳವಡಿಸುವುದು.<br>➢ ಹೊಸ ಎಚ್.ಟಿ. ಮಾರ್ಗಗಳನ್ನು ಒಂದು ಅಥವಾ ಎರಡು ಪಂಪುಸೆಟ್ಟುಗಳಿಗೆ ವಿಸ್ತರಿಸುವುದು.<br>➢ 63/100 ಕೆ.ವಿ.ಎ. ಸಾಮರ್ಥ್ಯದ ವಿತರಣ ಪರಿವರ್ತಕಗಳನ್ನು ಕಳಚಿ ಸದರಿ ಪರಿವರ್ತಕಗಳ ಬದಲಾಗಿ 25 ಕೆ.ವಿ.ಎ. ಪರಿವರ್ತಕಗಳನ್ನು ಅಳವಡಿಸುವುದು,<br>➢ ವಿತರಣಾ ನಷ್ಟವನ್ನು ಕಡಿಮೆಗೊಳಿಸುವುದು ಹೆಚ್.ವಿ.ಡಿ.ಎಸ್ ಯೋಜನೆಯ ಮೂಲ ಉದ್ದೇಶವಾಗಿರುತ್ತದೆ.<br>➢ ಹೆಚ್.ವಿ.ಡಿ.ಎಸ್ ಕಾಮಗಾರಿಯನ್ನು ಮಾರ್ಚ್-2018 ರಲ್ಲಿ ಮಾಗಡಿ ತಾಲ್ಲೂಕಿನ ಕುದೂರು ಉಪವಿಭಾಗದಲ್ಲಿ ಕೈಗೊಳ್ಳಲಾಗಿರುತ್ತದೆ. (ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗ ರವರ ಪತ್ರ ದಿನಾಂಕ 11-10-2017 ರಲ್ಲಿ ಅನುಮೋದನೆಯನ್ನು ನೀಡಿರುತ್ತಾರೆ).<br><br>ಮಾಗಡಿ ತಾಲ್ಲೂಕಿನ ಕುದೂರು ಉಪವಿಭಾಗದಲ್ಲಿ ವಿತರಣಾ ನಷ್ಟ ಹೆಚ್ಚಿರುವ 11 ಕೆವಿ ಫೀಡರ್ ಗಳನ್ನು ಆಯ್ದು ಮೂಲ ಪರಿವರ್ತಕವಾರು ಕಾಮಗಾರಿಗಳನ್ನು ಕೈಗೊಳ್ಳಲಾಗಿರುತ್ತದೆ. 2017 ಮತ್ತು ಅದರ |

| | | |
|---|---|---|
| | | ಹಿಂದಿನ ಸಾಲಿನ ಎಲ್ಲಾ ಸಕ್ರಮಗೊಂಡ ಕೊಳವೆಬಾವಿ ಸ್ಥಾವರಗಳಿಗೆ ಹಾಲಿ ಇರುವ ಎಲ್.ಟಿ ಮಾರ್ಗವನ್ನು ಹೆಚ್.ಟಿ ಮಾರ್ಗವನ್ನಾಗಿ ಬದಲಾಯಿಸಿ ಮೂಲ ಪರಿವರ್ತಕಗಳನ್ನು ಕಳಚಿ ಒಂದು ಅಥವಾ ಎರಡು ಪಂಪ್ ಸೆಟ್‌ಗಳಿಗೆ ಒಂದು ಪ್ರತ್ಯೇಕ 25 ಕೆವಿಎ ಪರಿವರ್ತಕವನ್ನು ಅಳವಡಿಸಿ ವಿದ್ಯುತ್ ಸಂಪರ್ಕ ಕಲ್ಪಿಸಲಾಗಿರುತ್ತದೆ.<br><br>ಆದುದರಿಂದ, ಹೆಚ್.ವಿ.ಡಿ.ಎಸ್. ಯೋಜನೆಯಡಿಯಲ್ಲಿ ಆಧ್ಯತೆಯನ್ನು ಪರಿಗಣಿಸಲಾಗುವುದಿಲ್ಲ. |
| ಆ) | ಕುದೂರು ಉಪವಿಭಾಗ ವ್ಯಾಪ್ತಿಯಲ್ಲಿ ಹೆಚ್.ವಿ.ಡಿ.ಎಸ್. ಯೋಜನೆಯಡಿಯಲ್ಲಿ ಅಳವಡಿಸಬೇಕಾಗಿದ್ದ ಟಿ.ಸಿ.ಗಳ ಸಂಖ್ಯೆ ಎಷ್ಟು; ಇದುವರೆವಿಗೂ ಎಷ್ಟು ಜನ ರೈತರಿಗೆ ಹೆಚ್.ವಿ.ಡಿ.ಎಸ್. ಯೋಜನೆಯಡಿಯಲ್ಲಿ ಟಿ.ಸಿ.ಗಳನ್ನು ಅಳವಡಿಸಲಾಗಿದೆ; ಇನ್ನೂ ಅಳವಡಿಸಬೇಕಾಗಿರುವ ಟಿ.ಸಿ.ಗಳೆಷ್ಟು; ಇದುವರೆವಿಗೂ ಟಿ.ಸಿ.ಗಳನ್ನು ಅಳವಡಿಸದಿರಲು ಕಾರಣಗಳೇನು; ಯಾವ ಕಾಲಮಿತಿಯಲ್ಲಿ ಟಿ.ಸಿ.ಗಳನ್ನು ಅಳವಡಿಸಲಾಗುವುದು? (ಸಂಪೂರ್ಣ ವಿವರ ನೀಡುವುದು) | **ಮಾಗಡಿ ತಾಲ್ಲೂಕು ಕುದೂರು ಉಪವಿಭಾಗ ವ್ಯಾಪ್ತಿಯಲ್ಲಿ ಹೆಚ್.ವಿ.ಡಿ.ಎಸ್ ಯೋಜನೆಯಡಿ ಕೈಗೊಂಡ ಕಾಮಗಾರಿಗಳ ವಿವರ:**<br>➢ ಮಂಜೂರಾಗಿ ಅಳವಡಿಸಬೇಕಾಗಿದ್ದ ಒಟ್ಟು ಟಿ.ಸಿ ಗಳ ಸಂಖ್ಯೆ :3125.<br>➢ ಹೆಚ್.ವಿ.ಡಿ.ಎಸ್ ಯೋಜನೆಯಡಿಯಲ್ಲಿ ಅಳವಡಿಸಲಾಗಿರುವ ಟಿ.ಸಿ ಗಳ ಸಂಖ್ಯೆ : 3049.<br>➢ ಹೆಚ್.ವಿ.ಡಿ.ಎಸ್ ಯೋಜನೆಯಡಿಯಲ್ಲಿ ಟಿ.ಸಿ.ಗಳನ್ನು ಅಳವಡಿಸಲಾಗಿರುವ ರೈತರ ಪಂಪ್ ಸೆಟ್‌ಗಳ ಸಂಖ್ಯೆ : 4421.<br>➢ ಇನ್ನೂ ಅಳವಡಿಸಬೇಕಾಗಿರುವ ಟಿ.ಸಿ ಗಳ ಸಂಖ್ಯೆ : 76<br>ಕಾಮಗಾರಿಯನ್ನು ಪೂರ್ಣಗೊಳಿಸಲು ಮಾರ್ಚ್-2018 ರಿಂದ ಒಂದು ವರ್ಷದ ಅವಧಿಗೆ ಅವಾರ್ಡ್ ನೀಡಲಾಗಿದ್ದು, ಕೋವಿಡ್ ಲಾಕ್ ಡೌನ್ ಹಾಗೂ ಇತರ ಕಾರಣಗಳಿಂದ ಸೆಪ್ಟೆಂಬರ್-2021 ರವರೆಗೆ ಅವಧಿಯನ್ನು ವಿಸ್ತರಿಸಲಾಗಿರುತ್ತದೆ. ಅನುಮೋದನೆಗೊಂಡಿದ್ದ ಕಾಮಗಾರಿಯ ಯೋಜನಾ ವೆಚ್ಚ ಪೂರ್ಣಗೊಂಡಿದ್ದರಿಂದ ಉಳಿದ ಕಾಮಗಾರಿಗಳನ್ನು ಪೂರ್ಣಗೊಳಿಸಲು ಸಾಧ್ಯವಾಗಿರುವುದಿಲ್ಲ.<br><br>ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗ ರವರ ಪತ್ರ ದಿನಾಂಕ 06.12.2017 ರ ಪ್ರಕಾರ ಮುಂದಿನ ಆದೇಶದವರೆಗೆ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯಿಂದ ಯಾವುದೇ ಹೊಸ ಹೆಚ್.ವಿ.ಡಿ.ಎಸ್ ಯೋಜನೆಗಳನ್ನು ಅನುಮೋದನೆಗಾಗಿ ಕೆ.ಇ.ಆರ್.ಸಿ ರವರಿಗೆ ಪ್ರಸ್ತಾವನೆಯನ್ನು ಸಲ್ಲಿಸಬಾರದೆಂದು ತಿಳಿಸಿರುತ್ತಾರೆ.<br>ಈ ಸಂಬಂಧ ಬೆಸ್ಕಾಂನಿಂದ ಯಾವುದೇ ಹೊಸ ಹೆಚ್.ವಿ.ಡಿ.ಎಸ್ ಯೋಜನೆಗಳ ಅನುಮೋದನೆಗಾಗಿ ಕೆ.ಇ.ಆರ್.ಸಿ ರವರಿಗೆ ಪ್ರಸ್ತಾವನೆಯನ್ನು ಸಲ್ಲಿಸಲು ಅವಕಾಶವಿರುವುದಿಲ್ಲ. |

ಸಂಖ್ಯೆ: ಎನರ್ಜಿ 15 ಇಬಿಪಿಎಸ್ 2022

(ವಿ ಸುನಿಲ್ ಕುಮಾರ್)
ಇಂಧನ ಹಾಗೂ ಕನ್ನಡ ಮತ್ತು
ಸಂಸ್ಕೃತಿ ಸಚಿವರು